# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1013
ಸದಸ್ಯರ ಹೆಸರು : ಶ್ರೀ ಗೋವಿಂದರಾಜು
(ವಿಧಾನ ಸಭೆಯಿಂದ ಚುನಾಯಿತರಾದವರು)
ಉತ್ತರಿಸುವ ಸಚಿವರು : ಕಂದಾಯ ಸಚಿವರು
ಉತ್ತರಿಸುವ ದಿನಾಂಕ : 22.12.2021

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ಉಪ ವಿಭಾಗಾಧಿಕಾರಿ (ಎ.ಸಿ) ನ್ಯಾಯಾಲಯಕ್ಕೆ ಯಾವ ಯಾವ ಕೇಸ್‌ಗಳನ್ನು ದಾಖಲು ಮಾಡಿಕೊಳ್ಳಲಾಗುವುದು; | ರಾಜ್ಯದ ಉಪವಿಭಾಗಾಧಿಕಾರಿಗಳ ನ್ಯಾಯಾಲಯಗಳಲ್ಲಿ ಈ ಕೆಳಕಂಡ ಕಾಯ್ದೆ/ಕಲಂ/ನಿಯಮಗಳಡಿಯಲ್ಲಿ ಪ್ರಕರಣಗಳನ್ನು ದಾಖಲು ಮಾಡಿಕೊಳ್ಳಲಾಗುತ್ತಿದೆ:<br>1. ಕರ್ನಾಟಕ ಭೂ ಕಂದಾಯ ಕಾಯ್ದೆ ಕಲಂ 49, 136(2) ಮತ್ತು ನಿಯಮಗಳು 108(ಕೆ) ಮತ್ತು 108(ಜೆ)ರಡಿಯಲ್ಲಿ ಮೇಲ್ಮನವಿ ಪ್ರಕರಣಗಳು.<br>2. ಕರ್ನಾಟಕ ಅನುಸೂಚಿತ ಜಾತಿಗಳು ಮತ್ತು ಅನುಸೂಚಿತ ಬುಡಕಟ್ಟುಗಳ (ಕೇವಲ ಭೂಮಿಗಳ ಪರಭಾರೆ ನಿಷೇಧ) ಅಧಿನಿಯಮ 1978, ನಿಯಮ 1979ರ ಕಲಂ 5(1)ರ ರೀತ್ಯಾ ಮೇಲ್ಮನವಿ ಪ್ರಕರಣಗಳು.<br>3. ಭೂ ಸ್ವಾಧೀನ ಕಾಯ್ದೆ 1894ರ ಕಲಂ 28(ಎ) ರ ಮೇಲ್ಮನವಿ ಪ್ರಕರಣಗಳು.<br>4. ಭೂ ಸುಧಾರಣೆ ಕಾಯ್ದೆ 1961 ಕಲಂ 79(ಎ) ಮತ್ತು (ಬಿ) ಸಂಬಂಧಿಸಿದಂತೆ ಮಾನ್ಯ ಉಚ್ಚ ನ್ಯಾಯಾಲಯದಿಂದ ಪುನರ್ ವಿಚಾರಣೆಗೆ ಆದೇಶಿಸಲ್ಪಟ್ಟ ಪ್ರಕರಣಗಳು.<br>5. ಸಾರ್ವಜನಿಕ ಆವರಣಗಳ ಅನಧಿಕೃತ ಅನುಭವದಾರರನ್ನು ಒಕ್ಕಲೆಬ್ಬಿಸುವ ಕಾಯ್ದೆ 1974 ಕಲಂ 3 ಮತ್ತು 4 ರಡಿ ದಾಖಲಾಗುವ ಪ್ರಕರಣಗಳು.<br>6. ವಕ್ಫ್ ಕಾಯ್ದೆ 1955ರ ಕಲಂ 68 ರಡಿ ದಾಖಲಾಗುವ ಪ್ರಕರಣಗಳು.<br>7. ಕರ್ನಾಟಕ ಪೋಲೀಸ್ ಅಧಿನಿಯಮದಡಿ ಬರುವ ಗಡಿಪಾರು ಪ್ರಕರಣಗಳು (ಕಲಂ 56).<br>8. ಕರ್ನಾಟಕ ಪೌರಸಭೆ ಕಾಯ್ದೆ 1964 (ಕಲಂ 82).<br>9. ಮಾಹಿತಿ ಹಕ್ಕು ಅಧಿನಿಯಮ 2005ರ ಕಲಂ19(1).<br>10. ತಂದೆ ತಾಯಿಯರ ಮತ್ತು ಹಿರಿಯ ನಾಗರೀಕರ ಪಾಲನೆ ಪೋಷಣೆ ಮತ್ತು ಯೋಗಕ್ಷೇಮ ಅಧಿನಿಯಮ 2007.<br>11. ಕರ್ನಾಟಕ ಜಾನುವಾರ ಹತ್ಯೆ ಪ್ರತಿ ಬಂಧಕ ಮತ್ತು ಸಂರಕ್ಷಣಾ ಆಧ್ಯಾದೇಶ 2020.<br>12. ಕರ್ನಾಟಕ ಪರಿಶಿಷ್ಟ ಜಾತಿ ಪರಿಶಿಷ್ಟ ವರ್ಗ ಹಾಗೂ ಇತರ ಹಿಂದುಳಿದ ವರ್ಗಗಳ (ಮೀಸಲಾತಿ ಮತ್ತು ಆಯ್ಕೆ ಇತ್ಯಾದಿ) ಕಾಯ್ದೆ 1990 ಕಲಂ 4 ಬಿ.<br>13. ಕರ್ನಾಟಕ ಸಕಾಲ ಸೇವೆಗಳ ಅಧಿನಿಯಮ 2011. ಕರ್ನಾಟಕ ನಾಗರೀಕ ಸೇವಾ ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ ನಿಯಮ 1957.<br>14. ಜೀತ ನಿರ್ಮೂಲನ ಕಾಯ್ದೆ 1976 ಉಪ ನಿಯಮ 04.<br>15. ಕರ್ನಾಟಕ ಪಂಚಾಯತ್ ರಾಜ್ ಕಾಯ್ದೆ 1993 ಮತ್ತು 1994.<br>16. ಸಿಆರ್‌ಪಿಸಿ-1973 |

<table>
<tr><th>ಕ್ರ. ಸಂ</th><th>ಪ್ರಶ್ನೆ</th><th>ಉತ್ತರ</th></tr>
<tr><td>ಆ.</td><td>ಇದರಲ್ಲಿ ಕಳೆದ 3 ವರ್ಷದಿಂದ ಎಷ್ಟು ಹಿರಿಯ ನಾಗರೀಕರ ಕೇಸ್‌ಗಳು ದಾಖಲಾಗಿದೆ; (ಜಿಲ್ಲಾವಾರು ವಿವರ ಒದಗಿಸುವುದು)</td><td>ಉಪವಿಭಾಗಾಧಿಕಾರಿಗಳ ನ್ಯಾಯಾಲಯಗಳಲ್ಲಿ ಕಳೆದ 3 ವರ್ಷದಿಂದ ದಾಖಲಾಗಿರುವ ಹಿರಿಯ ನಾಗರೀಕರ ಪ್ರಕರಣಗಳ ಜಿಲ್ಲಾವಾರು ವಿವರಗಳು ಕೆಳಕಂಡಂತಿವೆ:<br><br>
<table>
<tr><th>ಕ್ರ.ಸಂ.</th><th>ಜಿಲ್ಲೆಯ ಹೆಸರು</th><th>ಪ್ರಕರಣಗಳ ಸಂಖ್ಯೆ</th></tr>
<tr><td>1.</td><td>ಬೆಂಗಳೂರು ನಗರ</td><td>538</td></tr>
<tr><td>2.</td><td>ಬೆಂಗಳೂರು ಗ್ರಾಮಾಂತರ</td><td>80</td></tr>
<tr><td>3.</td><td>ರಾಮನಗರ</td><td>25</td></tr>
<tr><td>4.</td><td>ಚಿಕ್ಕಬಳ್ಳಾಪುರ</td><td>43</td></tr>
<tr><td>5.</td><td>ಕೋಲಾರ</td><td>29</td></tr>
<tr><td>6.</td><td>ತುಮಕೂರು</td><td>313</td></tr>
<tr><td>7.</td><td>ಚಿತ್ರದುರ್ಗ</td><td>25</td></tr>
<tr><td>8.</td><td>ದಾವಣಗೆರೆ</td><td>82</td></tr>
<tr><td>9.</td><td>ಶಿವಮೊಗ್ಗ</td><td>84</td></tr>
<tr><td>10.</td><td>ಮೈಸೂರು</td><td>205</td></tr>
<tr><td>11.</td><td>ಚಾಮರಾಜನಗರ</td><td>18</td></tr>
<tr><td>12.</td><td>ಮಂಡ್ಯ</td><td>157</td></tr>
<tr><td>13.</td><td>ಹಾಸನ</td><td>155</td></tr>
<tr><td>14.</td><td>ಚಿಕ್ಕಮಗಳೂರು</td><td>108</td></tr>
<tr><td>15.</td><td>ಕೊಡಗು</td><td>15</td></tr>
<tr><td>16.</td><td>ದಕ್ಷಿಣ ಕನ್ನಡ</td><td>159</td></tr>
<tr><td>17.</td><td>ಉಡುಪಿ</td><td>153</td></tr>
<tr><td>18.</td><td>ಬೆಳಗಾವಿ</td><td>57</td></tr>
<tr><td>19.</td><td>ವಿಜಯಪುರ</td><td>176</td></tr>
<tr><td>20.</td><td>ಬಾಗಲಕೋಟೆ</td><td>82</td></tr>
<tr><td>21.</td><td>ಧಾರವಾಡ</td><td>126</td></tr>
<tr><td>22.</td><td>ಗದಗ</td><td>31</td></tr>
<tr><td>23.</td><td>ಹಾವೇರಿ</td><td>41</td></tr>
<tr><td>24.</td><td>ಉತ್ತರ ಕನ್ನಡ</td><td>24</td></tr>
<tr><td>25.</td><td>ಕಲಬುರಗಿ</td><td>19</td></tr>
<tr><td>26.</td><td>ಯಾದಗಿರಿ</td><td>12</td></tr>
<tr><td>27.</td><td>ರಾಯಚೂರು</td><td>48</td></tr>
<tr><td>28.</td><td>ಕೊಪ್ಪಳ</td><td>71</td></tr>
<tr><td>29.</td><td>ಬಳ್ಳಾರಿ</td><td>08</td></tr>
<tr><td>30.</td><td>ಬೀದರ</td><td>27</td></tr>
<tr><td>31.</td><td>ವಿಜಯನಗರ</td><td>26</td></tr>
<tr><td colspan="2">ಒಟ್ಟು</td><td>2937</td></tr>
</table>
</td></tr>
</table>

..3..



| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಇ | ಹಿರಿಯ ನಾಗರೀಕರ ದಾವೆಗಳನ್ನು ಇಂತಿಷ್ಟು ದಿನಗಳಲ್ಲಿ ಪೂರ್ಣಗೊಳಿಸಬೇಕೆಂಬ ಬಗ್ಗೆ ಸರ್ಕಾರದ ಆದೇಶ ಇದೆಯೇ; (ಪ್ರತಿಯನ್ನು ಒದಗಿಸುವುದು) | ತಂದೆ ತಾಯಿಯರ ಮತ್ತು ಹಿರಿಯ ನಾಗರಿಕರ ಪಾಲನೆ, ಪೋಷಣೆ ಮತ್ತು ಯೋಗಕ್ಷೇಮ ಅಧಿನಿಯಮ 2007ರ ಕಲಂ 5(2) ರಂತೆ 90 ದಿನಗಳ ಅವಧಿಯೊಳಗೆ ಪ್ರಕರಣವನ್ನು ಮುಕ್ತಾಯಗೊಳಿಸಬೇಕಾಗುತ್ತದೆ. ಆದಾಗ್ಯೂ ನ್ಯಾಯಾಧೀಕರಣವು ಕಾರಣಗಳನ್ನು ಲಿಖಿತದಲ್ಲಿ ದಾಖಲಿಸಲು ಅಸಾಧಾರಣಾ ಸಂದರ್ಭಗಳಲ್ಲಿ ಒಂದೇ ಒಂದು ಬಾರಿಗೆ ಗರಿಷ್ಟ 30 ದಿನಗಳ ಅವಧಿಯವರಿಗೆ ವಿಸ್ತರಿಸಬಹುದಾಗಿರುತ್ತದೆ. |
| ಈ | ಹಾಗಿದ್ದರೇ, ಅವಧಿಯ ಒಳಗೆ ಪೂರ್ಣಗೊಳಿಸಲಾಗಿದೆಯೇ ಅಥವಾ ಬಾಕಿ ಉಳಿಸಿಕೊಳ್ಳಲಾಗಿದೆಯೇ; | ಬಹುತೇಕ ಜಿಲ್ಲೆಗಳಲ್ಲಿ ಪ್ರಕರಣಗಳನ್ನು ನಿಗಧಿತ ಕಾಲಾಮಿತಿಯೊಳಗೆ ಇತ್ಯರ್ಥಗೊಳಿಸಲು ಕ್ರಮವಹಿಸಲಾಗುತ್ತಿದೆ.<br>ಕೋವಿಡ್-19 ಸಾಂಕ್ರಾಮಿಕದ ನಿಮಿತ್ತ ವಾದಿ ಮತ್ತು ಪ್ರತಿವಾದಿಗಳು ವಿಚಾರಣೆಗೆ ಗೈರುಹಾಜರಾದ ಕಾರಣ, ಸರಿಯಾದ ವಿಳಾಸಗಳ ಕೊರತೆಯಿಂದ ನೋಟಿಸ್ ಜಾರಿಯಾಗಲು ವಿಳಂಬವಾಗುತ್ತಿರುವ ಕಾರಣ ಹಾಗೂ ಉಪವಿಭಾಗಾಧಿಕಾರಿಗಳು ಚುನಾವಣೆ, ಆಡಳಿತಾತ್ಮಕ ತುರ್ತು ಕಾರಣಗಳಲ್ಲಿ ನಿರತರಾಗಿರುವ ಸಂದರ್ಭಗಳಲ್ಲಿ ಪ್ರಕರಣಗಳನ್ನು ಮುಂದೂಡಲಾಗಿರುತ್ತದೆ.<br><br>ಅರೆನ್ಯಾಯಿಕ ಪ್ರಕರಣಗಳನ್ನು ಶೀಘ್ರವಾಗಿ ವಿಲೇವಾರಿ ಮಾಡುವ ದೃಷ್ಟಿಯಿಂದ ವಾರದ 2 ಪೂರ್ಣ ದಿನಗಳಂದು ಕಡ್ಡಾಯವಾಗಿ ವಿಚಾರಣೆಗಳನ್ನು ನಡೆಸುವಂತೆ ಸರ್ಕಾರದಿಂದ ನಿರ್ದೇಶನ ನೀಡಲಾಗಿರುತ್ತದೆ ಹಾಗೂ ಪ್ರಾದೇಶಿಕ ಆಯುಕ್ತರ ಹಂತದಲ್ಲಿ ಪ್ರಗತಿ ಪರಿಶೀಲನೆ ನಡೆಸಿ ಪ್ರಕರಣಗಳ ತ್ವರಿತ ವಿಲೇವಾರಿ ಕ್ರಮವಹಿಸಲಾಗುತ್ತಿದೆ. |
| ಉ | ಹಿರಿಯ ನಾಗರೀಕರ ದಾವೆಗಳನ್ನು ಸಮಯಕ್ಕೆ ಸರಿಯಾಗಿ ನಡೆಸದೆ, ಮುಂದೂಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | |
| ಊ | ಬಂದಿದ್ದಲ್ಲಿ, ಈ ಬಗ್ಗೆ ಸರ್ಕಾರ ತೆಗೆದುಕೊಂಡಿರುವ ಕ್ರಮವೇನು? | |

**ಸಂಖ್ಯೆ:ಆರ್‌ಡಿ 149 ಟಿಆರ್‌ಎಂ 2021**

**(ಆರ್. ಅಶೋಕ)**
ಕಂದಾಯ ಸಚಿವರು